ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 48

ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್
(ನಾಮ ನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ಸಚಿವರು : ಮಾನ್ಯ ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತಿರಿಸಬೇಕಾದ ದಿನಾಂಕ : 13-12-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಎಲೆಕ್ಟ್ರಿಕಲ್ ಕಾರುಗಳು ಹಾಗೂ ದ್ವಿಚಕ್ರ ವಾಹನಗಳು ಹೆಚ್ಚಾಗಿ ಮಾರಾಟವಾಗುತ್ತಿದೆಯೇ; | ಹೌದು. ಕಳೆದ ನಾಲ್ಕು ವರ್ಷಗಳಲ್ಲಿ ಕರ್ನಾಟಕ ರಾಜ್ಯದಲ್ಲಿ ನೋಂದಣಿಯಾದ ಎಲೆಕ್ಟ್ರಿಕ್ ವಾಹನಗಳು ಮತ್ತು ಇತರೆ ವಾಹನಗಳ ವಿವರಗಳು ಕೆಳಕಂಡಂತಿವೆ :- |

| ವರ್ಷ | ಎಲೆಕ್ಟ್ರಿಕ್ ಚಾಲಿತ | | | | ಇತರೆ ಇಂಧನ ಚಾಲಿತ | | | |
|---|---|---|---|---|---|---|---|---|
| | ದ್ವಿಚಕ್ರ | 3-ಚಕ್ರ | 4-ಚಕ್ರ | ಒಟ್ಟು | ದ್ವಿಚಕ್ರ | 3-ಚಕ್ರ | 4-ಚಕ್ರ | ಒಟ್ಟು |
| 2018-19 | 3023 | 173 | 610 | 3806 | 1263234 | 43323 | 225707 | 1532264 |
| 2019-20 | 6394 | 223 | 562 | 7179 | 1160971 | 41632 | 204853 | 1407456 |
| 2020-21 | 11784 | 429 | 806 | 13019 | 852679 | 8793 | 185888 | 1047360 |
| 2021-22* | 19615 | 1585 | 1064 | 22264 | 477276 | 6409 | 126290 | 609975 |
| ಒಟ್ಟು | 40816 | 2410 | 3042 | 46268 | 3754160 | 100157 | 742738 | 4597055 |

(* ನವೆಂಬರ್ 2021 ರವರೆಗೆ )

ಮೇಲ್ಕಾಣಿಸಿದ ಅಂಕಿ-ಅಂಶಗಳ ಮೇರೆಗೆ, ಪ್ರತಿ ವರ್ಷ ಎಲೆಕ್ಟ್ರಿಕ್ ವಾಹನಗಳ ನೋಂದಣಿಯಲ್ಲಿ ಹೆಚ್ಚಳವಾಗಿರುತ್ತದೆ. ಆದರೆ ಇತರೆ ಇಂಧನ ಚಾಲಿತ ವಾಹನಗಳಿಗೆ ಹೋಲಿಸಿದರೆ ಶೇ.1 ರಷ್ಟು ಮಾತ್ರವೇ ಎಲೆಕ್ಟ್ರಿಕ್ ವಾಹನಗಳು ನೋಂದಣಿಯಾಗಿರುತ್ತವೆ.

| | | |
|---|---|---|
| ಆ | ಪ್ರತಿ ಎಲೆಕ್ಟ್ರಿಕಲ್ ವಾಹನ ಖರೀದಿಸಲು ಸರ್ಕಾರದಿಂದ ನೀಡಲಾಗುವ ಅನುದಾನದ ವಿವರ ಒದಗಿಸುವುದು; | ಕೇಂದ್ರ ಸರ್ಕಾರದ Fame India Phase-II ಯೋಜನೆ ಅಡಿಯಲ್ಲಿ ಭಾರಿ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ಯಮಗಳ ಸಚಿವಾಲಯದ ಅಧಿಸೂಚನೆ ಸಂ.ಎಸ್.ಒ.1300(ಇ) ದಿನಾಂಕ:08-03-2019 ರಲ್ಲಿ, ಭಾರತದಾದ್ಯಂತ ಎಲೆಕ್ಟ್ರಿಕ್ ವಾಹನಗಳನ್ನು ಖರೀದಿಸುವವರಿಗೆ ವಾಹನ ತಯಾರಕರ ಮೂಲಕ ಸಹಾಯಧನವನ್ನು ನೀಡಲಾಗುತ್ತದೆ<br><br>ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ.ಸಾರಿಇ 76 ಸಾಇಪ 2016 ದಿನಾಂಕ:31-03-2016 ರಲ್ಲಿ ಎಲ್ಲಾ ವರ್ಗದ ಎಲೆಕ್ಟ್ರಿಕ್ ವಾಹನಗಳಿಗೆ (ಇ-ಕಾರ್ಟ್ ಹಾಗೂ ಇ-ರಿಕ್ಷಾ ವಾಹನಗಳನ್ನೊಳಗೊಂಡಂತೆ) ದಿನಾಂಕ:01-04-2016 ರಿಂದ ಮೋಟಾರು ವಾಹನ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಿ ಆದೇಶ ಹೊರಡಿಸಲಾಗಿರುತ್ತದೆ. ಈಗಲೂ ಸಹ ಈ ಆದೇಶ ಚಾಲ್ತಿಯಲ್ಲಿದೆ.<br><br>ಅಲ್ಲದೆ, ಕೇಂದ್ರ ಸರ್ಕಾರದ ಅಧಿಸೂಚನೆ ಸಂಖ್ಯೆ.GSR 525 (E) ದಿನಾಂಕ:02-08-2021ರಲ್ಲಿ ಬ್ಯಾಟರಿ ಚಾಲಿತ ವಾಹನಗಳಿಗೆ ನೋಂದಣಿ ಶುಲ್ಕದಿಂದ ವಿನಾಯಿತಿ ನೀಡಲಾಗಿರುತ್ತದೆ.<br><br>ಪ್ರತಿ ಎಲೆಕ್ಟ್ರಿಕ್ ವಾಹನಗಳನ್ನು ಖರೀದಿಸುವಾಗ ಗ್ರಾಹಕರಿಗೆ ಸರ್ಕಾರದಿಂದ ನೀಡಲಾಗುವ ರಿಯಾಯಿತಿಗಳ ವಿವರ ಈ ಕೆಳಕಂಡಂತಿದೆ:<br><br>• ರಸ್ತೆ ತೆರಿಗೆ ಮೇಲೆ ವಿನಾಯಿತಿಯನ್ನು ನೀಡಲಾಗಿದೆ.<br>• ಜಿ.ಎಸ್.ಟಿ. ಯನ್ನು ಶೇ 12 ಶೇ 5 ಕ್ಕೆ ಕಡಿಮೆಗೊಳಿಸಲಾಗಿದೆ.<br>• ವಿದ್ಯುತ್ ಚಾಲಿತ ವಾಹನದ ಸಾಲದ ಬಡ್ಡಿಯಲ್ಲಿ ಆದಾಯ ತೆರಿಗೆ ರಿಯಾಯಿತಿಯನ್ನು ನೀಡಲಾಗಿದೆ. |
| ಇ | ಈ ವಾಹನಗಳಿಗೆ ಚಾರ್ಜಿಂಗ್ ಪಾಯಿಂಟ್‌ಗಳನ್ನು ಅಳವಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಬೆಂಗಳೂರು ನಗರದಲ್ಲಿ ಏರುತ್ತಿರುವ ವಾಯುಮಾಲಿನ್ಯವನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಎಲೆಕ್ಟ್ರಿಕ್ ವಾಹನಗಳ ಬಳಕೆಯನ್ನು ಪ್ರೋತ್ಸಾಹಿಸಲು 2018-19ರ ಆಯವ್ಯಯದಲ್ಲಿ ರೂ.4.00 ಕೋಟಿ ವೆಚ್ಚದಲ್ಲಿ 100 ಚಾರ್ಜಿಂಗ್ ಘಟಕಗಳನ್ನು ಸ್ಥಾಪಿಸುವ ಯೋಜನೆ ಯನ್ನು ಜಾರಿಗೆ ತರಲಾಗಿದೆ. ಸದರಿ ಯೋಜನೆಯನ್ವಯ ಬೆಸ್ಕಾಂ ಸಂಸ್ಥೆಯವರು ಈಗಾಗಲೇ 100 ಎಸಿ ಮತ್ತು ಡಿಸಿ ಚಾರ್ಜಿಂಗ್ ಸ್ಟೇಷನ್ ಗಳನ್ನು ಬೆಂಗಳೂರಿನ ಸುಮಾರು 70 ಸ್ಥಳಗಳಲ್ಲಿ ಸ್ಥಾಪಿಸಿರುತ್ತಾರೆ. |

ಕರ್ನಾಟಕ ಸರ್ಕಾರದ ದಿನಾಂಕ: 28-12-2018ರ ಪತ್ರದನ್ವಯ ಬೆಸ್ಕಾಂನ್ನು ರಾಜ್ಯದಲ್ಲಿ ವಿದ್ಯುತ್ ವಾಹನ ಚಾರ್ಜಿಂಗ್ ಕೇಂದ್ರಗಳ ಮೂಲ ಸೌಕರ್ಯಗಳನ್ನು ಸ್ಥಾಪಿಸಲು ನೋಡಲ್ ಏಜೆನ್ಸಿಯನ್ನಾಗಿ ನೇಮಿಸಿದೆ.

ಬೆ.ವಿ.ಕಂ. ವತಿಯಿಂದ 10 ಚಾರ್ಜಿಂಗ್ ಪಾಯಿಂಟ್‌ಗಳು ಹಾಗೂ ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರದ ರೂ.4 ಕೋಟಿ ಅನುದಾನದಲ್ಲಿ 126 ಚಾರ್ಜಿಂಗ್ ಪಾಯಿಂಟ್‌ಗಳನ್ನು 2018 ರಿಂದ ಇಲ್ಲಿಯವರೆಗೆ ಬೆಂಗಳೂರು ನಗರದಲ್ಲಿ ಸ್ಥಾಪಿಸಲಾಗಿದೆ.

ಭಾರತ ಸರ್ಕಾರದ ಫೇಮ್-2 ಯೋಜನೆಯಡಿ ರಾಜ್ಯಕ್ಕೆ 172 ಹಾಗೂ ಅದರಲ್ಲಿ ಬೆಂಗಳೂರು ನಗರಕ್ಕೆ 152, ಮಂಗಳೂರು ನಗರಕ್ಕೆ 10 ಮತ್ತು ಕಲಬುರ್ಗಿ ನಗರಕ್ಕೆ 10 ವಿದ್ಯುತ್ ವಾಹನ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು ಅನುಮೋದನೆ ನೀಡಿದೆ. ಸದರಿ ಇವಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು ಮೆ:ಎನ್‌ಟಿಪಿಸಿ ಲಿಮಿಟೆಡ್ ಮತ್ತು ರಾಜಸ್ಥಾನ ಎಲೆಕ್ಟ್ರಾನಿಕ್ಸ್ & ಇನ್ಸ್‌ಟ್ರುಮೆಂಟ್ಸ್ ಲಿಮಿಟೆಡ್ ಜೊತೆ ಬೆವಿಕಂ MoU ಕಾರ್ಯಗತಗೊಳಿಸಿದೆ. ಮುಂದುವರೆದು, 17 ಬೆಸ್ಕಾಂ ಸ್ಥಳಗಳಲ್ಲಿ ರಾಜ್ಯದ ಹೆದ್ದಾರಿಗಳಲ್ಲಿ ಇವಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು ರಾಜ್ಯದ ಹೆದ್ದಾರಿಗಳಲ್ಲಿ ಇವಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು Energy Efficiency Services Limited(EESL)ಗೆ ಒಪ್ಪಿಗೆ ನೀಡಿದೆ.

2021-22ರ ಬಜೆಟ್ ನಲ್ಲಿ ಪಿಪಿಪಿ ಆಧಾರದ ಮೇಲೆ ರಾಜ್ಯದಲ್ಲಿ 1000 ಇವಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸುವುದಾಗಿ ಘೋಷಿಸಿದೆ. ಬೆಸ್ಕಾಂ ರಾಜ್ಯ ನೋಡಲ್ ಏಜೆನ್ಸಿಯಾಗಿದ್ದು, ಕ್ರಿಯಾ ಯೋಜನೆ ಮತ್ತು ಪ್ರಮಾಣಿತ ಬಿಡ್ಡಿಂಗ್ ದಾಖಲೆಗಳನ್ನು ಸಿದ್ಧಪಡಿಸಿದೆ. ಸದರಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು ಸ್ಥಳ ಗುರುತಿಸಲು ಸರ್ಕಾರದ ವತಿಯಿಂದ ಎಲ್ಲಾ ಇಲಾಖೆಗಳಿಗೆ, ಜಿಲ್ಲಾಧಿಕಾರಿಗಳಿಗೆ ಸೂಚನೆಗಳನ್ನು ಜಾರಿಗೊಳಿಸಿದ್ದು, ಇಲ್ಲಿಯವರೆಗೂ 494 ಸ್ಥಳಗಳನ್ನು ರಾಜ್ಯಾದ್ಯಂತ ಗುರುತಿಸಲಾಗಿದೆ.

ಟಿಡಿ 114 ಟಿಡಿಕ್ಯೂ 2021

(ಬಿ. ಶ್ರೀರಾಮುಲು)
ಮಾನ್ಯ ಸಾರಿಗೆ ಮತ್ತು ಪರಿಶಿಷ್ಟ
ಪಂಗಡಗಳ ಕಲ್ಯಾಣ ಸಚಿವರು